


# ಕರ್ನಾಟಕ ವಿಧಾನಪರಿಷತ್ತು

ನೂರ ನಲವತ್ತ ಮೂರನೆಯ ಅಧಿವೇಶನದ ಮುಂದುವರೆದ ಉಪವೇಶನ

**ಚುಕ್ಕೆ ರಹಿತ ಪ್ರಶ್ನೆ**

ದಿನಾಂಕ : 19-03-2021 ಪ್ರಶ್ನೆ ಸಂಖ್ಯೆ : 1426 (1763)

0ಸದಸ್ಯರ ಹೆಸರು ಮತ್ತು ಕ್ಷೇತ್ರ : ಡಾ: ಚಂದ್ರಶೇಖರ್ ಬಿ. ಪಾಟೀಲ್ (ಪದವೀಧರರ ಕ್ಷೇತ್ರ)

ಉತ್ತರ ನೀಡಬೇಕಾ.ದ ದಿನಾಂಕ : 19-03-2021

ಉತ್ತರಿಸುವ ಸಚಿವರು: ಮಾನ್ಯ ಗ್ರಾಮಿಣಾಭಿವೃದ್ಧಿ ಮತ್ತು ಪಂಚಾಯತ್ ರಾಜ್ ಸಚಿವರು

ವಿಷಯ : ಪಿ.ಡಿ.ಓ ಸಹಾಯಕ ನಿರ್ದೇಶಕರು ಹಾಗೂ ಕಾರ್ಯನಿರ್ವಾಹಕ ಅಧಿಕಾರಿಗಳ ಸೇವೆ ಜೇಷ್ಠತೆ ಮತ್ತು ಬಡ್ತಿ ಕುರಿತು

(ಅ) 2010 ರಿಂದ 2021 ರವರೆಗೆ ಗ್ರಾಮೀಣಾಭಿವೃದ್ಧಿ ಮತ್ತು ಪಂಚಾಯಿತಿ ರಾಜ್ ಇಲಾಖೆಯಲ್ಲಿ ಪತ್ರಾಂಕಿತ ಹುದ್ದೆಗಳಿಗೆ ಬಡ್ತಿ ನೀಡಲು ನಿಯಮಗಳನ್ನು ಪಾಲಿಸಿ ಇಲಾಖಾ ಮುಂಬಡ್ತಿ ಸಭೆ ನಡೆಸಲಾಗಿದೆಯೇ; (ಸಂಪೂರ್ಣ ಮಾಹಿತಿ ನೀಡುವುದು)

(ಆ) ಸರ್ಕಾರಿ ಆದೇಶ ಸಂಖ್ಯೆ ಸಿ.ಆ.ಸು.ಇ 130 ಸೇವಿಡಿ:2007, ದಿ:08.10.2007ರಲ್ಲಿ ನಿಗದಿಪಡಿಸಿದ ವಿಧಾನದ ಪ್ರಕಾರ ಸಹಾಯಕ ನಿರ್ದೇಶಕರ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲಾಗಿದೆಯೇ; ಹಾಗಾದರೆ, (ಸದರಿ ದಾಖಲೆ ನೀಡುವುದು) (ಸದರಿ ಆದೇಶದ ಪ್ರಕಾರ ವೃಂದ ಮತ್ತು ನೇಮಕಾತಿಯ ಉಪ-ಸಮಿತಿಯ ಮತ್ತು ಸಮಿತಿ ಸದಸ್ಯರ ಹೆಸರು ಹಾಗೂ ಪದನಾಮವನ್ನು ತಿಳಿಸುವುದು)

(ಇ) ಪಂಚಾಯಿತಿ ವಿಸ್ತರಣಾಧಿಕಾರಿ ಹುದ್ದೆಯು ಪಂಚಾಯತ್ ಅಭಿವೃದ್ಧಿ ಅಧಿಕಾರಿ ಹುದ್ದೆಯ 33% ಬಡ್ತಿ ಕೋಟಾದಡಿ ವಿಲೀನವಾಗಿ, ವಿಸ್ತರಣಾಧಿಕಾರಿ ವೃಂದ ರದ್ದಾದ ಬಗ್ಗೆ ವೃಂದ ಮತ್ತು ನೇಮಕಾತಿಯ ಉಪ ಸಮಿತಿ ಹಾಗೂ ಸಮಿತಿಯ ಗಮನಕ್ಕೆ ಬಂದಿದೆಯೇ; (ಉಪ ಸಮಿತಿ ಮತ್ತು ಸಮಿತಿಯ ಸದಸ್ಯರು ನೀಡಿದ ಅಭಿಪ್ರಾಯ/ ನಿರ್ಣಯದ ದಾಖಲೆ ನೀಡುವುದು)

(ಈ) ಪಿ.ಡಿ.ಓ ಗಳ ರಾಜ್ಯ ಮಟ್ಟದ ಜೇಷ್ಠತಾ ಪಟ್ಟಿಯನ್ನು ಪ್ರಥಮವಾಗಿ ಯಾವ ದಿನಾಂಕದಂದು ತಯಾರಿಸಿ ಬಿಡುಗಡೆ ಮಾಡಲಾಯಿತು; ಸದರಿ ಪಟ್ಟಿಯನ್ನು ತಯಾರಿಸುವ ಪೂರ್ವದಲ್ಲಿ ಎಷ್ಟು ಜನರಿಗೆ ಸಹಾಯಕ ನಿರ್ದೇಶಕರ ಹುದ್ದೆಗೆ ಮುಂಬಡ್ತಿ ನೀಡಲಾಗಿದೆ; (ಆದೇಶದ ಪ್ರತಿ ಇಲಾಖಾ ಮುಂಬಡ್ತಿ ಸಮಿತಿಯ ಟಿಪ್ಪಣಿ, ನಡವಳಿ ಪ್ರತಿ ನೀಡುವುದು)

(ಉ) ಸಹಾಯಕ ನಿರ್ದೇಶಕರ ಹುದ್ದೆಗೆ ಪೋಷಕರ ವೃಂದ ಯಾವುದು;

(ಊ) ರದ್ದಾದ ವಿಸ್ತರಣಾಧಿಕಾರಿ ವೃಂದದ ಜೇಷ್ಠತಾ ಪಟ್ಟಿಯನ್ನಾಧರಿಸಿ ಮುಂಬಡ್ತಿ ನೀಡುವ ಬಗ್ಗೆ ಸರ್ಕಾರದಲ್ಲಿ ಯಾವುದಾದರೂ ನಿಯಮಗಳಿವೆಯೇ; (ಇದ್ದಲ್ಲಿ, ಪ್ರತಿ ನೀಡುವುದು)

(ಋ) 2010 ರಿಂದ 2021ರವರೆಗೆ ಸಹಾಯಕ ನಿರ್ದೇಶಕರ ಹುದ್ದೆಯ ಬಡ್ತಿಗಾಗಿ ಜರುಗಿದ ಒಟ್ಟು ಇಲಾಖಾ ಮುಂಬಡ್ತಿ ಸಮಿತಿಯ ಸಭೆಗಳ ಸಂಖ್ಯೆ ಎಷ್ಟು? (ಸದರಿ ಸಭೆಗಳ ಟಿಪ್ಪಣಿ, ನಡುವಳಿ ಪ್ರತಿ ಪರೀಕ್ಷಿಸಿದ ಇಲಾಖಾ ಪರೀಕ್ಷೆ ಪ್ರಮಾಣ ಪತ್ರಗಳ ಪ್ರತಿ ನೀಡುವುದು)